# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ : 1366

ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ.

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 24.12.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬಿ.ಎಂ.ಟಿ.ಸಿ. ಸಾರಿಗೆ ಸಂಸ್ಥೆಯು ಕಳೆದ ನಾಲ್ಕು ವರ್ಷಗಳಿಂದ ಎಷ್ಟು ಮೊತ್ತದ ಸಾಲವನ್ನು ಪಡೆದಿದೆ; ಯಾವ ರೂಪದಲ್ಲಿ ಸಾಲ ಪಡೆಯಲಾಗಿದೆ; ಸಾಲಕ್ಕೆ ಪಾವತಿಸುತ್ತಿರುವ ಬಡ್ಡಿಯ ಮೊತ್ತ ಎಷ್ಟು; ಎಷ್ಟು ಮೊತ್ತದ ಸಾಲವನ್ನು ಮರುಪಾವತಿಸಲಾಗಿದೆ; | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಕಳೆದ 4 ವರ್ಷಗಳಲ್ಲಿ ಪಡೆದ ಸಾಲದ, ಸಾಲಕ್ಕೆ ಪಾವತಿಸಿರುವ ಬಡ್ಡಿಯ ಮೊತ್ತ ಹಾಗೂ ಮರುಪಾವತಿಸಲಾದ ಸಾಲದ ವಿವರಗಳನ್ನು 'ಅನುಬಂಧ' ದಲ್ಲಿ ನೀಡಲಾಗಿದೆ. |
| ಆ. | ಬಿ.ಎಂ.ಟಿ.ಸಿ. ಸಾರಿಗೆ ಸಂಸ್ಥೆಯು ತೀವ್ರ ನಷ್ಟದಿಂದ ಬಳಲುತ್ತಿದ್ದು, ಸರ್ಕಾರಕ್ಕೆ ಅನಗತ್ಯ ಹೊರೆಯಾಗಿರುವ ಈ ಸಂಸ್ಥೆಯನ್ನು ಖಾಸಗೀಕರಣಗೊಳಿಸುವ ಕುರಿತು ಸರ್ಕಾರದ ನಿಲುವೇನು; | ಬೆಂ.ಮ.ಸಾ.ಸಂಸ್ಥೆಯನ್ನು ಖಾಸಗೀಕರಣಗೊಳಿಸುವ ಪ್ರಸ್ತಾವನೆ ಇರುವುದಿಲ್ಲ. |
| ಇ. | ಬಿ.ಎಂ.ಟಿ.ಸಿ. ಸಾರಿಗೆ ಸಂಸ್ಥೆಯ ಹಳೆಯ ಬಸ್ಸುಗಳು ಸೇರಿದಂತೆ ಅನುಪಯುಕ್ತ ವಸ್ತುಗಳ ಹರಾಜು ಮಾಡಲಾಗಿದೆಯೇ; ಮಾಡಿಲ್ಲದಿದ್ದಲ್ಲಿ, ಕಾರಣಗಳನ್ನು ತಿಳಿಸುವುದು; | ಬೆಂ.ಮ.ಸಾ.ಸಂಸ್ಥೆಯಲ್ಲಿ ಕಾಲಕಾಲಕ್ಕೆ ಹಳೆಯ ಬಸ್ಸುಗಳು ಸೇರಿದಂತೆ ಅನುಪಯುಕ್ತ ವಸ್ತುಗಳ ಹರಾಜನ್ನು ಮಾಡಲಾಗುತ್ತಿದೆ. |
| ಈ. | ಬಿ.ಎಂ.ಟಿ.ಸಿ.ಯ ವಿವಿಧ ಡಿಪೋಗಳಲ್ಲಿರುವ ವೋಲ್ವೋ ಬಸ್ಸುಗಳ ಸಂಚಾರ ಸ್ಥಗಿತವಾಗಿರುವುದರ ಕುರಿತು ಸರ್ಕಾರದ ನಿಲುವೇನು; ಈಗಾಗಲೇ ಬಿ.ಎಂ.ಟಿ.ಸಿ ಡಿಪೋಗಳಲ್ಲಿ ಸಾವಿರಾರು ಕೋಟಿ ವೆಚ್ಚ ಮಾಡಿ ಖರೀದಿಸಿದ 600ಕ್ಕೂ ಹೆಚ್ಚು ವೋಲ್ವೋ ಬಸ್ಸುಗಳ ಸಂಚಾರ ಸ್ಥಗಿತವಾದರೂ ಹೊಸತಾಗಿ 643 ಬಸ್ಸುಗಳನ್ನು ಈ ಕೊರೋನಾ ಸಂಕಷ್ಟ ಸಮಯದಲ್ಲಿ ಖರೀದಿಸುವ ಅಗತ್ಯವಿದೆಯೇ? | 2020 ಮತ್ತು 2021ನೇ ಸಾಲಿನಲ್ಲಿ ಕೋವಿಡ್-19ರ ಸಾಂಕ್ರಾಮಿಕ ರೋಗದ ಮೊದಲನೇ ಮತ್ತು ಎರಡನೇ ಅಲೆಯ ಹರಡುವಿಕೆಯನ್ನು ತಡೆಗಟ್ಟುವ ಸಲುವಾಗಿ ಮಾರ್ಚ್-2020 ರಿಂದ ಮೇ-2020 ಮತ್ತು ಏಪ್ರಿಲ್-2021 ರಿಂದ ಜೂನ್-2021 ರವರೆಗೆ ಲಾಕ್‌ಡೌನ್ ಜಾರಿಯಲ್ಲಿದ್ದು, ಈ ಎರಡೂ ಸಂದರ್ಭಗಳಲ್ಲಿ ಬೆಂ.ಮ.ಸಾ.ಸಂಸ್ಥೆಯ ಸಾಮಾನ್ಯ ಬಸ್ಸುಗಳೊಂದಿಗೆ ಹವಾನಿಯಂತ್ರಿತ ಬಸ್ಸುಗಳ ಕಾರ್ಯಾಚರಣೆಯನ್ನೂ ಸಹ ಸ್ಥಗಿತಗೊಳಿಸಲಾಗಿತ್ತು.<br><br>ಸಾರ್ವಜನಿಕ ಪ್ರಯಾಣಿಕರಿಗೆ ಸಾರಿಗೆ ಸೇವೆಗಳನ್ನು ಪುನರಾರಂಭಿಸಿದ ನಂತರ, ಮೊದಲನೇ ಹಂತದಲ್ಲಿ ಅಂದರೆ ಜೂನ್-2020 ಮಾಹೆಯಲ್ಲಿ 75 ವಜ್ರ ಸೇವೆ ಹಾಗೂ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ನಿಯಮಿತವಾಗಿ 23 ವಾಯುವಜ್ರ ಹವಾನಿಯಂತ್ರಿತ ಸೇವೆಗಳನ್ನು ಆಚರಣೆಗೊಳಿಸಲಾಗಿತ್ತು. ಮುಂದುವರೆದು, ಕೋವಿಡ್-19ರ ಪರಿಣಾಮದಿಂದ ಎಲ್ಲಾ ವಾಣಿಜ್ಯ-ವಹಿವಾಟುಗಳು ಕುಂಠಿತಗೊಂಡು, ಎಲ್ಲಾ IT-BT ಕಂಪನಿಗಳ ಸಿಬ್ಬಂದಿಗಳಿಗೆ Work From Home |

ಮುಂದುವರೆದಿದ್ದು ಹಾಗೂ ಸಾರ್ವಜನಿಕ ಪ್ರಯಾಣಿಕರು ಹವಾನಿಯಂತ್ರಿತ ಬಸ್ಸುಗಳಲ್ಲಿ ಪ್ರಯಾಣಿಸಲು ಹಿಂಜರಿಯುತ್ತಿದ್ದರಿಂದ ವಜ್ರ ಸೇವೆಗಳಲ್ಲಿ ನಿರೀಕ್ಷಿತ ಮಟ್ಟದ ಪ್ರಯಾಣಿಕರ ಪ್ರೋತ್ಸಾಹ ದೊರೆಯದ ಕಾರಣ ವಜ್ರ ಸಾರಿಗೆಗಳ ಕಾರ್ಯಾಚರಣೆಯನ್ನು ಕಡಿಮೆಗೊಳಿಸಲಾಗಿರುತ್ತದೆ ಹಾಗೂ ವಾಯುವಜ್ರ ಸೇವೆಗಳನ್ನು ಮುಂದುವರೆಸಲಾಯಿತು.

ಸೆಪ್ಟೆಂಬರ್-2020 ಮಾಹೆಯಲ್ಲಿ 05 ಪ್ರಮುಖ ಮಾರ್ಗಗಳಲ್ಲಿ 30 ವಜ್ರ ಸಾರಿಗೆಗಳನ್ನು ಪುನರಾರಂಭಿಸಲಾಗಿರುತ್ತದೆ. ಈ ಸಾರಿಗೆಗಳಲ್ಲಿ ನಿರೀಕ್ಷಿತ ಮಟ್ಟದ ಪ್ರಯಾಣಿಕರ ಪ್ರೋತ್ಸಾಹ ದೊರೆಯದೆ, ಸಾರಿಗೆ ಆದಾಯವು ಕುಂಠಿತಗೊಂಡು, ಆದಾಯಕ್ಕಿಂತ ಕಾರ್ಯಾಚರಣೆ ವೆಚ್ಚ ಹೆಚ್ಚಾದ ಕಾರಣ, ಮೂರು ವಾರಗಳ ನಂತರ ವಜ್ರ ಸೇವೆಗಳ ಕಾರ್ಯಾಚರಣೆಯನ್ನು ಹಿಂಪಡೆಯಲಾಗಿರುತ್ತದೆ.

ತದನಂತರ, ಡಿಸೆಂಬರ್-2020ರ ಮಾಹೆಯಲ್ಲಿ ನಡೆದ ಸಂಸ್ಥೆಯ ಮಂಡಳಿ ನಿರ್ದೇಶಕರ ಸಭೆಯಲ್ಲಿ ಹವಾನಿಯಂತ್ರಿತ ವಜ್ರ ಸೇವೆಗಳ ಕಾರ್ಯಾಚರಣೆಯು ಪುನಃ ಯಥಾಸ್ಥಿತಿಗೆ ಮರಳುವವರೆಗೆ, ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಅನುಮೋದನೆ ಪಡೆಯಲಾಗಿರುತ್ತದೆ. ಅದರಂತೆ, ವಜ್ರ ಸಾರಿಗೆಗಳಲ್ಲಿ ಪ್ರಯಾಣಿಕರ ಸಂಖ್ಯೆಯನ್ನು ಹೆಚ್ಚಿಸುವ ಸಲುವಾಗಿ ಜನವರಿ-2021ನೇ ಮಾಹೆಯಲ್ಲಿ ಸದರಿ ಸಾರಿಗೆಗಳ ಪ್ರಯಾಣ ದರಗಳನ್ನು ಶೇ.21ರಷ್ಟು ಇಳಿಕೆ ಮಾಡಲಾಗಿದ್ದು, 104 ವಜ್ರ ಮತ್ತು 61 ವಾಯುವಜ್ರ ಒಟ್ಟಾರೆ 165 ಹವಾನಿಯಂತ್ರಿತ ಸಾರಿಗೆಗಳನ್ನು ಪುನರಾರಂಭಿಸಲಾಗಿತ್ತು. ಆದಾಗ್ಯೂ, ವಜ್ರ ಸಾರಿಗೆಗಳಲ್ಲಿ ನಿರೀಕ್ಷಿತ ಮಟ್ಟದ ಪ್ರಯಾಣಿಕರ ಪ್ರೋತ್ಸಾಹ ಇಲ್ಲದಿರುವುದರಿಂದ ಹಂತಹಂತವಾಗಿ ಹವಾನಿಯಂತ್ರಿತ ಸಾರಿಗೆಗಳನ್ನು ಕಡಿಮೆಗೊಳಿಸಲಾಗಿದೆ. ಕೋವಿಡ್-19ರ 2ನೇ ಅಲೆಯಲ್ಲಿ ಹವಾನಿಯಂತ್ರಿತ ಸಾರಿಗೆಗಳನ್ನು ರದ್ದುಗೊಳಿಸಲಾಗಿದೆ.

ಜೂನ್-2021ರ ಮಾಹೆಯಿಂದ ಪ್ರಯಾಣಿಕರ ದಟ್ಟಣೆಗನುಗುಣವಾಗಿ ಹವಾನಿಯಂತ್ರಿತ ಸಾರಿಗೆಗಳ ಕಾರ್ಯಾಚರಣೆ ಪ್ರಾರಂಭಿಸಲಾಗಿದೆ. ದಿನಾಂಕ:17-12-2021 ರಂತೆ 183 ವಜ್ರ ಸೇವೆ ಹಾಗೂ ಅಂತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ 78 ವಾಯುವಜ್ರ ಹವಾನಿಯಂತ್ರಿತ ಸೇವೆಗಳನ್ನು ಅಂದರೆ ಒಟ್ಟು 261 ಹವಾನಿಯಂತ್ರಿತ ಸಾರಿಗೆಗಳನ್ನು ಕಾರ್ಯಾಚರಣೆಗೊಳಿಸಲಾಗುತ್ತಿದೆ. ಹವಾನಿಯಂತ್ರಿತ ಬಸ್ಸುಗಳ ಉಪಯುಕ್ತತೆಯನ್ನು ಹೆಚ್ಚಿಸಲು ಹಾಗೂ ಸದರಿ ಬಸ್ಸುಗಳಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಪ್ರಯಾಣಿಕರನ್ನು ಆಕರ್ಷಿಸಲು ದಿನಾಂಕ: 17-12-2021 ರಿಂದ ಜಾರಿಗೆ ಬರುವಂತೆ ವಜ್ರ ಸಾರಿಗೆಗಳ ಟಿಕೆಟ್ ದರವನ್ನು (ಶೇ.34 ರಷ್ಟು) ಮತ್ತು ದೈನಿಕ ಪಾಸುಗಳ ದರವನ್ನು ಹಾಗೂ ದಿನಾಂಕ:01-01-2022 ರಿಂದ ಜಾರಿಗೆ ಬರುವಂತೆ ಮಾಸಿಕ ಪಾಸುಗಳ ದರವನ್ನು ಕಡಿಮೆಗೊಳಿಸಿ ಪರಿಷ್ಕರಿಸಲಾಗಿದೆ. ಪ್ರಯಾಣ ದರ ಕಡಿತದಿಂದ, ವಜ್ರ ಸಾರಿಗೆಗಳಲ್ಲಿ ಪ್ರಯಾಣಿಕರ ಸಂಖ್ಯೆ ಹೆಚ್ಚಾಗುವ ನಿರೀಕ್ಷೆಯಿದೆ.

ಪ್ರತಿ ವರ್ಷವು ನಿಷ್ಕ್ರಿಯೆಗೊಳಿಸಬೇಕಾದ ಹಳೆಯ ವಾಹನಗಳು ಮತ್ತು ಸೇರ್ಪಡೆಯಾಗಬಹುದಾದ ಹೊಸ ಅನುಸೂಚಿಗಳ ಆಧಾರದ ಮೇಲೆ

| | | |
|---|---|---|
| | | ಹೊಸ ಬಸ್ಸುಗಳನ್ನು ಖರೀದಿಸಲು ಯೋಜನೆ ರೂಪಿಸಲಾಗುತ್ತದೆ. 2017-18ನೇ ಸಾಲಿನಿಂದ 2021-22 (21ಡಿಸೆಂಬರ್-21)ರವರೆಗೂ, 9049 ಹೊಸ ಹವಾನಿಯಂತ್ರಿತವಲ್ಲದ ಬಸ್ಸುಗಳನ್ನು ಖರೀದಿ ಮಾಡಿ ಸಂಸ್ಥೆಯಲ್ಲಿನ ಹಳೆಯ ಹವಾನಿಯಂತ್ರಿತವಲ್ಲದ ಬಸ್ಸುಗಳನ್ನು ನಿಷ್ಕ್ರಿಯೆಗೊಳಿಸಲು ಯೋಜಿಸಲಾಗಿತ್ತು. ಆದರೆ ನ್ಯಾಯಮಂಡಳಿಯ ತಡೆಯಾಜ್ಞೆಗಳಿಂದ 2057 ಬಸ್ಸುಗಳನ್ನು ಮಾತ್ರ ಖರೀದಿಸಲಾಗಿರುತ್ತದೆ. ಇದರಿಂದ ಸಂಸ್ಥೆಯಲ್ಲಿನ ಹಳೆಯ ಬಸ್ಸುಗಳನ್ನು ಯೋಜನೆಯನುಸಾರ ನಿಷ್ಕ್ರಿಯೆಗೊಳಿಸಲು ಸಾಧ್ಯವಾಗಿರುವುದಿಲ್ಲ. ಪ್ರಸ್ತುತ ಹವಾನಿಯಂತ್ರಿತವಲ್ಲದ ಸಾಧಾರಣ ಬಸ್ಸುಗಳ ಪ್ರಯಾಣಿಕರ ಸಂಖ್ಯೆಯಲ್ಲಿ ಸತತವಾಗಿ ಏರಿಕೆ ಕಂಡುಬಂದಿರುತ್ತದೆ. ಪ್ರಸ್ತುತ ಎಲ್ಲಾ ಸಾಧಾರಣ ಬಸ್ಸುಗಳ ಅನುಸೂಚಿಗಳನ್ನು ಆಚರಣೆ ಮಾಡಲಾಗುತ್ತಿರುವುದರಿಂದ ಹಾಗೂ ಹಳೆಯ ಬಸ್ಸುಗಳನ್ನು ನಿಷ್ಕ್ರಿಯೆಗೊಳಿಸಬೇಕಾಗಿರುವುದರಿಂದ, 643 ಹವಾನಿಯಂತ್ರಿತವಲ್ಲದ ಬಸ್ಸುಗಳ ಖರೀದಿ ಅನಿವಾರ್ಯವಾಗಿರುತ್ತದೆ.<br><br>ಮುಂದುವರೆದು, 2017-18ನೇ ಸಾಲಿನ ಆಯವ್ಯಯದಲ್ಲಿ ಅಸಲು ಮತ್ತು ಬಡ್ಡಿ ಸಹಾಯಧನದ ಯೋಜನೆಯಡಿಯಲ್ಲಿ ಬೆಂ.ಮ.ಸಾ.ಸಂಸ್ಥೆಗೆ 1500 ಡೀಸೆಲ್ ಬಸ್ಸುಗಳನ್ನು ಖರೀದಿಸಲು ಕರ್ನಾಟಕ ಸರ್ಕಾರವು ಘೋಷಿಸಿದ್ದ ಅನುದಾನದಿಂದ 857 ಬಸ್ಸುಗಳನ್ನು ಖರೀದಿಸಲಾಗಿರುತ್ತದೆ. ಪ್ರಸ್ತುತ 643 ಬಸ್ಸುಗಳನ್ನು ಖರೀದಿಸಲು ಟೆಂಡರ್‌ನ್ನು ಅಂತಿಮಗೊಳಿಸಿದ್ದು, ಅನುದಾನದ ಲಭ್ಯತೆಗೆ ಅನುಗುಣವಾಗಿ 565 ಬಿ.ಎಸ್.-6 ಹವಾನಿಯಂತ್ರಿತವಲ್ಲದ ಸಾಧಾರಣ ವಾಹನಗಳನ್ನು ಮಾತ್ರ ಖರೀದಿಸಲಾಗುತ್ತಿರುತ್ತದೆ. |

ಸಂಖ್ಯೆ: ಟಿಡಿ 287 ಟಿಸಿಕ್ಯೂ 2021

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು